

**ಕರ್ನಾಟಕ ವಿಧಾನ ಪರಿಷತ್ತು**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1877
ಸದಸ್ಯರ ಹೆಸರು : ಶ್ರೀ ಪ್ರದೀಪ್ ಶೆಟ್ಟರ್
ಉತ್ತರಿಸುವ ದಿನಾಂಕ : 15/03/2022
ಉತ್ತರಿಸುವ ಸಚಿವರು : ಮಾನ್ಯ ನಗರಾಭಿವೃದ್ಧಿ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯಲ್ಲಿ ಆಯ್ಕೆಯಾಗಿರುವ ಸದಸ್ಯರು ಪ್ರಮಾಣ ವಚನ ಸ್ವೀಕಾರ ತೆಗೆದುಕೊಳ್ಳದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ದಿನಾಂಕ:03/09/2021 ರಂದು ಹುಬ್ಬಳ್ಳಿ-ಧಾರವಾಡ ಮಹಾ ನಗರಪಾಲಿಕೆಗೆ ಸಾರ್ವತ್ರಿಕ ಚುನಾವಣೆ ಜರುಗಿ, ಪಾಲಿಕೆಗೆ ನೂತನವಾಗಿ 82 ಸದಸ್ಯರು ಆಯ್ಕೆಯಾಗಿರುತ್ತಾರೆ. ಮೇಯರ್ ಮತ್ತು ಉಪ ಮೇಯರ್ ಚುನಾವಣೆ ಜರುಗದಿರುವುದರಿಂದ ಸದಸ್ಯರು ಪ್ರಮಾಣ ವಚನ ಸ್ವೀಕರಿಸಿರುವುದಿಲ್ಲ. |
| (ಆ) | ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯಲ್ಲಿ ಮೇಯರ್ ಮತ್ತು ಉಪ ಮೇಯರ್ ಆಯ್ಕೆಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| (ಇ) | ಸದಸ್ಯರ ಪ್ರಮಾಣ ವಚನ ಮತ್ತು ಮೇಯರ್ ಹಾಗೂ ಉಪ ಮೇಯರ್ ಆಯ್ಕೆ ವಿಳಂಬವಾಗಲು ಕಾರಣವೇನು? | ಹುಬ್ಬಳ್ಳಿ-ಧಾರವಾಡ, ಬೆಳಗಾವಿ ಮತ್ತು ಕಲಬುರಗಿ ಮಹಾನಗರ ಪಾಲಿಕೆಗಳಲ್ಲಿ ಮೇಯರ್ ಮತ್ತು ಉಪಮೇಯರ್ ಸ್ಥಾನಗಳ 20ನೇ ಅವಧಿಯು ಮುಕ್ತಾಯಗೊಂಡಿದ್ದು, ನ್ಯಾಯಾಲಯ ಪ್ರಕರಣಗಳ ಕಾರಣ 2 ವರ್ಷ ವಿಳಂಬವಾಗಿರುತ್ತದೆ. ಈ ಬಗ್ಗೆ ಪರಿಶೀಲಿಸಿ, ಈ ಮಹಾನಗರ ಪಾಲಿಕೆಗಳಲ್ಲಿ, ಮೇಯರ್ ಮತ್ತು ಉಪಮೇಯರ್ ಸ್ಥಾನಗಳಿಗೆ 21ನೇ ಅವಧಿಗೆ ನಿಗದಿಪಡಿಸಲಾಗಿಸಿದ್ದ ಮೀಸಲಾತಿಯನ್ವಯ ಚುನಾವಣೆಗಳನ್ನು ನಡೆಸುವಂತೆ ಸರ್ಕಾರದ ಪತ್ರ ಸಂಖ್ಯೆ:ನಅಇ 206 ಎಂಎಲ್ಆರ್ 2021; ದಿನಾಂಕ: 25/01/2022 ರಲ್ಲಿ ನಿರ್ದೇಶನ ನೀಡಲಾಗಿರುತ್ತದೆ.<br><br>ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಗೆ ಮೇಯರ್ ಹಾಗೂ ಉಪ ಮೇಯರ್ ಚುನಾವಣೆ ಜರುಗಿಸುವ ಕುರಿತಂತೆ, ನೂತನವಾಗಿ ಆಯ್ಕೆಗೊಂಡ 82 ಸದಸ್ಯರ ಮೀಸಲಾತಿ ಹಾಗೂ ಪಕ್ಷದ ವಿವರಗಳನ್ನೊಳಗೊಂಡ ರಾಜ್ಯಪತ್ರವನ್ನು ಪೂರೈಸಲು ಆಯುಕ್ತರು, ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆ ರವರು ಕೋರಿದ್ದು, ಅದರಂತೆ ವಿಶೇಷ ರಾಜ್ಯಪತ್ರದಲ್ಲಿ ಅಧಿಸೂಚನೆಯನ್ನು ಪ್ರಕಟಿಸಲಾಗಿದೆ. |

ಸಂಖ್ಯೆ: ನಅಇ 24 ಎಲ್ಸಿಕ್ಯೂ 2022

(ಬಿ.ಎ. ಬಸವರಾಜ)
ಮಾನ್ಯ ನಗರಾಭಿವೃದ್ಧಿ ಸಚಿವರು
(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು